# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 152
2. ಸದಸ್ಯರ ಹೆಸರು : ಶ್ರೀ ಹೆಚ್.ಎಂ.ರೇವಣ್ಣ
3. ಉತ್ತರಿಸಬೇಕಾದ ದಿನಾಂಕ : 16-07-2019
4. ಉತ್ತರಿಸುವ ಸಚಿವರು : ಮಾನ್ಯ ಜಲ ಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕಿನಲ್ಲಿ ಹಿಂದಿನ ಸರ್ಕಾರದಲ್ಲಿ ಶ್ರೀರಂಗ ಏತ ನೀರಾವರಿ ಕಾಮಗಾರಿ ಮಂಜೂರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಹೌದು |
| ಆ | ಈ ಕಾಮಗಾರಿಯು ಈಗ ಯಾವ ಹಂತದಲ್ಲಿದೆ ; ಪೂರ್ಣಗೊಳ್ಳಲು ಎಷ್ಟು ಕಾಲಾವಕಾಶ ಬೇಕಾಗುತ್ತದೆ ; | ಸದರಿ ಯೋಜನೆಯ ಪಂಪ್‌ಹೌಸ್ ನಿರ್ಮಾಣ ಕಾಮಗಾರಿ ಅಂತಿಮ ಹಂತಕ್ಕೆ ಬಂದಿರುತ್ತದೆ. ಏತ ನೀರಾವರಿ ಯೋಜನೆ ಅವಶ್ಯ ಮೋಟಾರ್ ಮತ್ತು ಪಂಪ್‌ಗಳ ಅಳವಡಿಕೆ ಪೂರ್ಣಗೊಂಡಿರುತ್ತದೆ. ವಿದ್ಯುತ್ ಸಬ್‌ಸ್ಟೇಷನ್ ಅಳವಡಿಸುವ ಕಾಮಗಾರಿ ಪ್ರಗತಿಯಲ್ಲಿರುತ್ತದೆ. ಇದರ ರೈಸಿಂಗ್ ಮೈನ್ 37.50 ಕಿ.ಮೀ. ಪೈಪ್‌ನಲ್ಲಿನ 13.50 ಕಿ.ಮೀ. ಉದ್ದದ ಪೈಪ್ ಅಳವಡಿಕೆ ಕಾಮಗಾರಿ ಪೂರ್ಣಗೊಂಡಿರುತ್ತದೆ. ಭೂಸ್ವಾಧೀನ ಕಾರ್ಯ ಪ್ರಗತಿಯಲ್ಲಿದ್ದು, ಉಳಿಕೆ ಕಾಮಗಾರಿಯು ಪೂರ್ಣಗೊಳ್ಳಲು ಡಿಸೆಂಬರ್ 2020 ರವರೆಗೆ ಸಮಯ ಬೇಕಾಗಿರುತ್ತದೆ. |
| ಇ | ಈ ಕಾಮಗಾರಿಗೆ ಮಂಜೂರಾಗಿರುವ ಹಣವೆಷ್ಟು ; | ಸದರಿ ಕಾಮಗಾರಿಗೆ ರೂ.277.50 ಕೋಟಿಗಳು ಮಂಜೂರಾಗಿರುತ್ತದೆ. |
| ಈ | ಇದಕ್ಕೆ ಸಂಬಂಧಪಟ್ಟಂತೆ ಜಮೀನು ಭೂಸ್ವಾಧೀನಪಡಿಸುವ ಕೆಲಸ ಪೂರ್ಣಗೊಂಡಿದೆಯೇ ; | ಸದರಿ ಯೋಜನೆಗೆ ಮಾಗಡಿ ತಾಲ್ಲೂಕಿನಲ್ಲಿ 50-00 ಎಕರೆ-ಗುಂಟೆ ಜಮೀನು ಬೇಕಾಗಿದ್ದು ಇದುವರೆಗೆ ನೇರ ಖರೀದಿ ಮೂಲಕ 10-14 ಎಕರೆ-ಗುಂಟೆ ಜಮೀನು ಭೂಸ್ವಾಧೀನ ವಾಗಿರುತ್ತದೆ. ಉಳಿದ 39-26 ಗುಂಟೆ ಪ್ರದೇಶವನ್ನು ನೇರವಾಗಿ ಖರೀದಿಸುವ ಪ್ರಕ್ರಿಯೆ ಪ್ರಗತಿಯಲ್ಲಿದೆ. ಕುಣಿಗಲ್ ತಾಲ್ಲೂಕಿನಲ್ಲಿ 22-26 ಎಕರೆ-ಗುಂಟೆ ಜಮೀನು ಬೇಕಾಗಿದ್ದು ಭೂಸ್ವಾಧೀನ ಪ್ರಕ್ರಿಯೆ ಜಾರಿಯಲ್ಲಿದೆ. |
| ಉ | ಕಾಮಗಾರಿ ಪೂರ್ಣಗೊಂಡ ನಂತರ ಎಷ್ಟು ಕೆರೆಗಳಿಗೆ ನೀರು ಒದಗಿಸಲಾಗುವುದು ? | ಸದರಿ ಯೋಜನೆ ಮುಕ್ತಾಯಗೊಂಡ ನಂತರ ಮಾಗಡಿ ತಾಲ್ಲೂಕಿನ 66 ಕೆರೆಗಳಿಗೆ ಮತ್ತು ಕುಣಿಗಲ್ ತಾಲ್ಲೂಕಿನ 17 ಕೆರೆಗಳಿಗೆ ಒಟ್ಟಾರೆ 83 ಕೆರೆಗಳಿಗೆ ಕುಡಿಯುವ ನೀರನ್ನು ಒದಗಿಸಲಾಗುವುದು. |

*ಸಂಖ್ಯೆ:ಜಸಂಇ 04 ಎನ್‌ಎಲ್‌ಎ 2019*

(ಡಿ.ಕೆ.ಶಿವಕುಮಾರ್)
ಜಲ ಸಂಪನ್ಮೂಲ ಸಚಿವರು